## ☙ ಕಿರಿದಾದ ಚತುರಸ್ರಕುಂಡ ರಚನಾ ಕ್ರಮ ❧

ಸ್ಮಾರ್ತಕುಂಡ ಸಮೀಕ್ಷಾಧ್ಯಾಯದಲ್ಲಿ ಸಮೀಕ್ಷಾ ಚಕ್ರವರ್ತಿಗಳಾದ ಮಧುಸೂದನರು **"ಕುಂಡ" ಎಂಟು ಅಂಗಗಳನ್ನು ಒಳಗೊಂಡಿದೆ** ಎಂದು ಸ್ಪಷ್ಟಪಡಿಸಿದ್ದಾರೆ. ಹಾಗಿರುವಾಗ ಆ ಎಂಟೂ ಅಂಗಗಳನ್ನು ಪರಿಶೀಲಿಸುತ್ತಾ, ಅತೀ ಚಿಕ್ಕದಾದ ಚತುರಸ್ರ ಕುಂಡವನ್ನು ರಚಿಸೋಣ.

**ಸ್ಥಾನಂ ಮಾನಂ ಕ್ಷೇತ್ರಂ ಖಾತೋ ನಾಭ್ಯೋಷ್ಠ ಮೇಖಲಾ ಯೋನಿಃ |**
**ಇತ್ಯಷ್ಟಾಂಗಂ ಕುಂಡಂ ಭವತಿ ಸ್ಮಾರ್ತಸ್ಯ ಕರ್ಮಣಃ ಸಿದ್ಧ್ಯೈ ||**

1) **ಸ್ಥಾನಮ್ –** ಕುಂಡ ನಿರ್ಮಾಣದ ಮುಖ್ಯ ಉದ್ದೇಶ ಯಜ್ಞ ನಿರ್ವಹಣೆಯೇ ಆಗಿದೆ. ಅಲ್ಲಿ ಆಯಾ ಯಾಗದ ಕಾಮನೆಯ ಮೇಲೆ ಕುಂಡದ ಆಕೃತಿಯನ್ನೂ, ಕುಂಡದ ದಿಕ್ಕಿನ ನಿರ್ದೇಶವನ್ನೂ ಶಾಸ್ತ್ರ ಪ್ರತ್ಯೇಕವಾಗಿ ಸೂಚಿಸಿದೆ. ಅದರಲ್ಲಿ ಚತುರಸ್ರವನ್ನೂ ಮತ್ತು ಪೂರ್ವದಿಕ್ಕನ್ನೂ ಸಾಮಾನ್ಯ ಶಾಸ್ತ್ರವನ್ನಾಗಿ ನಾವು ಸ್ವೀಕರಿಸಬಹುದು. ಆಕಾರ ಮತ್ತು ದಿಕ್ಕುಗಳು ಸಿದ್ಧವಾದ ಮೇಲೆ ಕುಂಡದ ಸ್ಥಾನವನ್ನು ಹೇಳುತ್ತಾರೆ. ವೇದಿಕೆಯನ್ನು ಸಿದ್ಧಪಡಿಸಿ, ಅದಕ್ಕನುಗುಣವಾಗಿ ನಾಲ್ಕೂ ದಿಕ್ಕುಗಳಲ್ಲಿ ಕುಂಡ ನಿರ್ಮಾಣ ಮಾಡುವುದು ಒಂದು ತೆರನಾದರೆ, ಮಧ್ಯದಲ್ಲಿ ಕುಂಡ ನಿರ್ಮಾಣ ಮಾಡಿ ಅದರಿಂದ ಈಶಾನ್ಯವೋ ಪೂರ್ವವೋ ಹೀಗೆ ವಿಹಿತಕ್ರಮವನ್ನನುಸರಿಸಿ ವೇದಿಯನ್ನು ಸಿದ್ಧ ಪಡಿಸುವುದು ಇನ್ನೊಂದು ತೆರನಾಗಿರುತ್ತದೆ. ಒಟ್ಟಿನಲ್ಲಿ ವೇದಿಗೂ ಮತ್ತು ಕುಂಡಕ್ಕೂ ಕಡಿಮೆಯೆಂದರೂ ಸುಮಾರು ೨ ಫೂಟಿನ ಅಂತರವಿರಬೇಕು ಎಂಬುದು ಸ್ಪಷ್ಟವಾಗಿದೆ.

   **ಕುಂಡವೇದ್ಯಂತರಂ ಚೈವ ಸಪಾದಕರ ಸಮ್ಮಿತಮ್ ||**

2) **ಮಾನಮ್ -** ಕುಂಡದ ಅಳತೆಯನ್ನು ಆಹುತಿ ಸಂಖ್ಯೆಯನ್ನನುಸರಿಸಿ ನಿರ್ಣಯಿಸುತ್ತಾರೆ. ಆದರೆ ಇದು ಒಂದೇ ಅಭಿಪ್ರಾಯದಲ್ಲಿ ಇಲ್ಲ! ಬೇರೆ ಬೇರೆ ಗ್ರಂಥಕಾರರು ಬೇರೆ ಬೇರೆ ನಿರ್ಣಯಗಳನ್ನು ನೀಡಿರುತ್ತಾರೆ. ಹಲವರು ಆಹುತಿ ಸಂಖ್ಯೆಯ ಮೇರೆಗೆ ಕುಂಡವನ್ನು ಅದರ ಭುಜದ ಅಳತೆಯ ಪ್ರಕಾರವಾಗಿ ವಿಭಾಗಿಸಿದ್ದಾರೆ. ಇನ್ನು ಕೆಲವರು ಕುಂಡದ ಕ್ಷೇತ್ರಫಲವನ್ನು ಆಧರಿಸಿ, ಕುಂಡದ ಪ್ರಮಾಣವನ್ನು ತಿಳಿಸಿದ್ದಾರೆ. ಅದೇ ರೀತಿ ಘನಫಲದ ಅಳತೆಯಿಂದಲೂ ಕುಂಡದ ವಿಭಾಗ ಮಾಡಬಹುದು. ಹೆಚ್ಚಾಗಿ ಹೋಮಾಹುತಿಗಳು ಕುಂಡದ ಕಂಠಪರ್ಯಂತ ಪೂರ್ಣಗೊಳ್ಳುವುದು ಸಂಪ್ರದಾಯದಲ್ಲಿ ಮಾನದಂಡವಾಗಿದೆ. ಕುಂಡಕ್ಕೆ ಆಯಕ್ರಮದಲ್ಲೂ ಪ್ರಶಸ್ತಾಂಶವನ್ನು ಹೇಳಿರುತ್ತಾರೆ. ವಿಷಮಾಯಗಳಾದ ಧ್ವಜಾಯ, ಗಜಾಯ, ಸಿಂಹಾಯ ಮತ್ತು ವೃಷಭಾಯಗಳು ಉತ್ತಮವಾಗಿವೆ. ಇನ್ನು ಸಮವಾದ ಧೂಮ್ರಶುನಕಖರಾದಿಗಳು ಅನಿಷ್ಟಕರವಾಗಿವೆ. ಅದರಲ್ಲೂ ಧ್ವಜಾಯವನ್ನು ಸರ್ವ ಮಾನ್ಯವೆಂದಿದ್ದಾರೆ.

**ಸ್ಥಾಪನೇ ಸರ್ವಕುಂಡಾನಾಂ ಧ್ವಜಾಯಃ ಸರ್ವಸಿದ್ಧಿದಃ |**

**ಧ್ವಜಾಯಹೀನಂ ಯತ್ಕುಂಡಂ ಪ್ರೋಕ್ತಂ ಕರ್ತುರನಿಷ್ಟಕೃತ್ ||**

**ಆ ಪ್ರಕಾರವಾಗಿ ಒಂದು ಕೋಷ್ಟಕವನ್ನು ಇಲ್ಲಿ ಗಮನಿಸಬೇಕು.**

| ದಶಮಾನ | ಆಹುತಿ ಸಂಖ್ಯೆ | ಭುಜದ ಅಳತೆ | ಕುಂಡಮಾನ | ಆಯಮಾನ |
|---|---|---|---|---|
| ದಶ | ೧೦ | ೦೯ ಇಂಚು | ಹಸ್ತಾರ್ಧ ಕುಂಡ | ಧ್ವಜಾಯ |
| ಶತ | ೧೦೦ | ೧೨ ಇಂಚು | ರತ್ನಿಹಸ್ತ | ಧ್ವಜಾಯ |
| ಸಹಸ್ರ | ೧೦೦೦ | ೧೮ ಇಂಚು | ಹಸ್ತಮಾತ್ರ | ಸಿಂಹಾಯ |
| ಅಯುತ | ೧೦೦೦೦ | ೨೬ ಇಂಚು | ದ್ವಿಹಸ್ತ ಕುಂಡ | ವೃಷಭಾಯ |
| ಲಕ್ಷ | ೧೦೦೦೦೦ | ೩೬ ಇಂಚು | ಚತುರ್ಹಸ್ತ ಕುಂಡ | ಧ್ವಜಾಯ |
| ಪ್ರಯುತ | ೧೦೦೦೦೦೦ | ೪೨ ಇಂಚು | ಷಡ್ಡಸ್ತ ಕುಂಡ | ವೃಷಭಾಯ |
| ಕೋಟಿ | ೧೦೦೦೦೦೦೦ | ೫೧ ಇಂಚು | ಅಷ್ಟಹಸ್ತಕುಂಡ | ಸಿಂಹಾಯ |

**3) ಕ್ಷೇತ್ರಮ್ –** ಕುಂಡ ನಿರ್ಮಾಣಕ್ಕೆ ಬೇಕಾಗುವ ಒಟ್ಟೂ ಜಾಗವನ್ನು **ಕ್ಷೇತ್ರ** ಎಂದು ಗುರುತಿಸಿದ್ದಾರೆ. ತಿಸ್ರ, ಚತುರಸ್ರ, ಪಂಚಾಸ್ರ, ಷಡಸ್ರ, ಸಪ್ತಾಸ್ರ, ಅಷ್ಟಾಸ್ರ, ಪದ್ಮ, ಯೋನಿ, ವೃತ್ತ ಮತ್ತು ಅರ್ಧವೃತ್ತ ಹೀಗೆ ಕುಂಡ ಕ್ಷೇತ್ರಗಳನ್ನು ಒಟ್ಟೂ ಹತ್ತು ಪ್ರಕಾರವಾಗಿ ಹೇಳಿದ್ದಾರೆ. ಆಯಾ ಮಾದರಿಯ ಕುಂಡವನ್ನು ವೃತ್ತದೊಳಗಿನ ಬಿಂದುಗಳಾಗಿ ಗುರುತಿಸಿ ಸಿದ್ಧಪಡಿಸಿ ಕೊಳ್ಳುವುದು ಸರಿಯಾದ ಕ್ರಮವಾಗಿದೆ. ಈಗ ಹಸ್ತಾರ್ಧ ಕುಂಡಕ್ಕೆ ಬೇಕಾಗುವ ವೃತ್ತವನ್ನು ನಿರ್ಮಿಸೋಣ.

ಇಲ್ಲಿ ತ್ರಿಜ್ಯ OB ಯ ಅಳತೆ ೦೬.೩೬ ಇಂಚುಗಳಾದರೆ, ವ್ಯಾಸ CB ಯ ಅಳತೆ ೧೨.೭೨ ಇಂಚುಗಳಾಗಿವೆ. ಕುಂಡದ ಭುಜ ABಯ ಅಳತೆ ಹಸ್ತಾರ್ಧ ಕುಂಡದ ಭುಜವಾದ್ದರಿಂದ ೦೯ ಇಂಚುಗಳಾಗಿರುತ್ತವೆ. ಪೂರ್ವ - ಪಶ್ಚಿಮದಿಕ್ಕುಗಳನ್ನು ಬಾಣದ ತುದಿಯುಳ್ಳ ರೇಖೆ



ಸೂಚಿಸುತ್ತಿದೆ. ಉಪದಿಕ್ಕಿನ ರೇಖೆಗಳನ್ನು ಸೇರಿಸಿ ಅಥವಾ ಛೇದಕಗಳನ್ನು ಬಳಸಿ ಚತುರಸ್ರವನ್ನು ಸಾಧಿಸಿ ಕೊಳ್ಳಬೇಕು. ಪ್ರಕೃತ ದಿಕ್ಸಾಧನೆ ಮತ್ತು ಚತುರಸ್ರ ಸಾಧನೆಗಳ ಬಗ್ಗೆ ವಿವರಣೆಯ ಅಗತ್ಯವಿಲ್ಲವಷ್ಟೇ !

4) **ಖಾತಃ –** ಭೂಮಿಯನ್ನು ಅಗೆದು ತೆಗೆದ ಭಾಗವೇ **ಖಾತ** ಎನ್ನುವ ಕುಂಡದ ಭಾಗವಾಗಿದೆ. "ವ್ಯಾಸದ ಅಳತೆಯ ಖಾತವನ್ನು ಆಯಾ ಕುಂಡಕ್ಕೆ ಮಾಡಬೇಕು" ಎನ್ನುವದೊಂದು ಪಕ್ಷವಾದರೆ, "ಭುಜಮಾನದ ಭಾಗವನ್ನು ಕೆಳಗೆ ನೆಲದಲ್ಲಿ ಅಗೆದು ತೆಗೆಯಬೇಕು." ಎಂಬುದು ಇನ್ನೊಂದು ಪಕ್ಷ. 'ಮೊದಲನೆಯ ಪಕ್ಷದವರು ಪ್ರಥಮ ಮೇಖಲೆಯ ತುದಿಯಿಂದ




ಅಳತೆ ತೆಗೆದುಕೊಂಡರೆ, ಎರಡನೆಯ ಪಕ್ಷದವರು ಭೂಮಿಯ ಪಾತಳಿಯಿಂದ ಅಳತೆ ತೆಗೆದು ಕೊಳ್ಳುತ್ತಾರೆ.' ಎಂಬುದು ಗಮನಿಸ ಬೇಕಾದ ಅಂಶವಾಗಿದೆ. ಪ್ರಕೃತದಲ್ಲಿ ಎರಡನೆಯ ಪಕ್ಷವನ್ನಾಶ್ರಯಿಸಿ, ನೆಲದಿಂದ ೦೯ ಇಂಚು ಖಾತ ಮಾಡಬೇಕು.

5) **ನಾಭಿಃ –** ಕುಂಡದ ಒಳಗೆ ಗರ್ಭಭಾಗದಲ್ಲಿ ಮಧ್ಯಮಣಿಯಂತೆ ಶೋಭಿಸುವ ಭಾಗವೇ ನಾಭಿ. ಇದು ಕುಂಡದ ಆಕಾರವನ್ನೇ ಹೊಂದಿರಬೇಕು ಎಂಬುದೊಂದು ಪಕ್ಷ. ಇಲ್ಲ ಪದ್ಮಾಕಾರವಾಗಿರಬೇಕು ಎಂಬುದಿನ್ನೊಂದು. ಎತ್ತರದಲ್ಲಿ ಕುಂಡ ವ್ಯಾಸ ಮಾನದ ೧/೧೨ ನೆಯ ಅಂಶವಾಗಿಯೂ, ಉದ್ದ - ಅಗಲಗಳಲ್ಲಿ ವ್ಯಾಸದ ೧/೬ ನೇ ಅಂಶವಾಗಿಯೂ

ಇರಬೇಕು. ಪ್ರಕೃತದಲ್ಲಿ ೦೧.೦೭ ಇಂಚು ಎತ್ತರವೂ ೦೨.೧೨ ಇಂಚು ಉದ್ದಗಲವೂ ಇರಬೇಕು. ಹೆಚ್ಚಿನವರು ಪದ್ಮ ಕುಂಡ ಒಂದನ್ನು ಬಿಟ್ಟು ಉಳಿದಂತೆ ಎಲ್ಲ ಕುಂಡಗಳಿಗೂ ಆಯಾ ಕುಂಡದ ಆಕೃತಿಯಲ್ಲಿಯೇ ಈ ನಾಭಿಯನ್ನು ನಿರ್ಮಾಣ ಮಾಡುವರು. ಪದ್ಮ ಕುಂಡಕ್ಕೆ ಮತ್ತೆ ನಾಭಿ ಬೇಡವೆನ್ನುವರು!

6) **ಓಷ್ಠಃ (ಕಂಠ) –** ಖಾತದ(ಹೊಂಡದ) ಸುತ್ತಲೂ ಮೇಲಿನ ಭಾಗದಲ್ಲಿ ಮೇಖಲೆಯ ಬುಡದಲ್ಲಿ ಇರುವ ರಿಕ್ತ ಭಾಗವೇ ಕಂಠ ಎನಿಸುತ್ತದೆ. ಆಯಾ ಕುಂಡ ವ್ಯಾಸ ಮಾನದ ೧/೧೨ ಅಥವಾ ೧/೨೪ ನೆಯ ಅಂಶಕದ ಲೆಕ್ಕದಂತೆ ಖಾತ ಮತ್ತು ಮೇಖಲೆಗಳ ಮಧ್ಯದಲ್ಲಿ ಸ್ಥಳಾವಕಾಶ ನಿರ್ಮಿಸಿ, ಕಂಠವನ್ನು ರಚಿಸಬೇಕೆನ್ನುವರು. ಹೆಚ್ಚಿನವರು ಎಲ್ಲ ಪ್ರಕಾರದ ಕುಂಡಗಳಿಗೂ ಒಂದು ಅಂಗುಲ ಪರಿಮಿತಿಯ ಕಂಠವನ್ನು ಎತ್ತಿ ಹಿಡಿದಿದ್ದಾರೆ.

**ಖಾತಾದೇಕಾಂಗುಲಂ ತ್ಯಕ್ತ್ವಾ ಮೇಖಲಾನಾಂ ವಿಧಿರ್ಭವೇತ್ ।**
**ಏಕಾಂಗುಲಸ್ಸ ಕಂಠಸ್ಸ್ಯಾನ್ಮೇಖಲಾ ಖಾತಮಧ್ಯಗಃ ॥**

ಪ್ರಕೃತ ಹಸ್ತಾರ್ಧ ಕುಂಡದ ಕಂಠವನ್ನು ನಾಲ್ಕೂ ಕಡೆಗಳಲ್ಲಿ ಮುಕ್ಕಾಲು ಇಂಚಿನ ರಿಕ್ತ ಸ್ಥಾನ ಕಲ್ಪಿಸಿ ನಿರ್ಮಿಸಬೇಕಾಗುತ್ತದೆ.

7) **ಮೇಖಲಾ -** ಕಂಠದ ಸುತ್ತಲೂ ನಿರ್ಮಿಸಿರುವ ತಡೆಗೋಡೆಯಂತಿರುವ ಅಥವಾ ಮೆಟ್ಟಿಲುಗಳಂತಿರುವ ಕುಂಡದ ಪ್ರಾಕಾರಗಳೇ ಮೇಖಲೆಗಳು. ಇವು ಆಯಾ ಕುಂಡದ ಆಕೃತಿಯನ್ನೇ ಹೊಂದಿರುತ್ತವೆ.ಈ ಮೇಖಲೆಗಳ ವಿಷಯದಲ್ಲಿ ನಾಲ್ಕು ಅಭಿಪ್ರಾಯಗಳುಂಟು. ಒಂದು ಕಟ್ಟೆ, ಎರಡು ಕಟ್ಟೆ, ಮೂರು ಕಟ್ಟೆ ಮತ್ತು ಐದುಕಟ್ಟೆಯ ಮೇಖಲೆಗಳು ಬೇಕೆಂಬುದಾಗಿ. ಇವುಗಳಲ್ಲಿ ಮೂರು ಮೇಖಲೆಗಳ ಪಕ್ಷ ಪ್ರಸಿದ್ಧವಾಗಿದೆ. ಅಲ್ಲೂ ಎರಡು ಮತಗಳುಂಟು. “ಸಮ ಮೇಖಲೆ ಮತ್ತು ವಿಷಮ ಮೇಖಲೆಗಳು” ಎಂದು.

**ಸಮಮೇಖಲೆ**



**ವಿಷಮಮೇಖಲೆ**



ಎತ್ತರದಲ್ಲಿ ಸಮ ಮತ್ತು ವಿಷಮ ಮೇಖಲೆಗಳಿದ್ದಂತೆ, ಅಗಲದಲ್ಲೂ ಸಮ ಮತ್ತು ವಿಷಮಮೇಖಲೆಗಳ ವಿಭಾಗವನ್ನು ತಂತ್ರ ಗ್ರಂಥಗಳಲ್ಲಿ ಕಾಣಬಹುದು. ಮೇಲೆ ಕಾಣಿಸಿದ ಚಿತ್ರ ಎತ್ತರವನ್ನು ಅವಲಂಬಿಸಿದ್ದಾಗಿದೆ. ಅವುಗಳ ಅಳತೆಯನ್ನು ಈಗ ಪರಿಶೀಲಿಸೋಣ.

**ಕುಂಡಾನಾಂ ಚತುರ್ವಿಂಶೋ ಭಾಗಃ ಸೋಽಂಗುಲಸಂಜ್ಞಕಃ |**

**ವಿಭಜ್ಯಾನೇನ ಕರ್ತವ್ಯಾ ಮೇಖಲಾ-ಕಂಠ-ನಾಭಯಃ ||**

ಈ ಸಾಮಾನ್ಯ ನಿಯಮವನ್ನನುಸರಿಸಿದರೆ ಕುಂಡ ಭುಜಮಾನದ ೧/೨೪ನೇ ಅಂಶಕವೇ ಅಂಗುಲ ಎಂದು ಪರಿಗಣಿಸಬೇಕು. ಆ ಪ್ರಕಾರವಾಗಿ ಮೇಖಲೆಯ ಅಳತೆ ಸಿದ್ಧವಾಗುತ್ತದೆ. ಚಿತ್ರದ ಒಂದೊಂದು ಚೌಕವೂ ಅಂಶಸಿದ್ಧ ಅಂಗುಲವರ್ಗವೆಂದು ಅರ್ಥೈಸಬೇಕು. ಪ್ರಥಮ ಮೇಖಲೆಗೆ ೦೬ ಅಂಗುಲ ಎತ್ತರವೂ ೦೪ ಅಂಗುಲ ಅಗಲವೂ ವಿಹಿತವಾಗಿದೆ. ಪ್ರಕೃತ ಹಸ್ತಾರ್ಧ ಕುಂಡದಲ್ಲಿ ಇದರ ಎತ್ತರ ೦೩.೩೭ ಇಂಚುಗಳು ಮತ್ತು ಅಗಲ ೦೧.೫೦ ಇಂಚುಗಳಾಗುತ್ತವೆ. ದ್ವಿತೀಯ ಮೇಖಲೆಯಾದರೋ ಸಮಪಕ್ಷದಲ್ಲಿ ಎತ್ತರ ೦೨.೨೫ ಇಂಚುಗಳು ಮತ್ತು ಅಗಲ ೦೧.೧೨ ಇಂಚುಗಳಾಗುತ್ತವೆ. ಅದೇ ರೀತಿ ತೃತೀಯ ಮೇಖಲೆಯ ಅಳತೆಯೂ ಎತ್ತರದಲ್ಲಿ ೦೧.೧೨ ಇಂಚುಗಳಾದರೆ ಅಗಲದಲ್ಲಿ ೦೦.೭೫ ಇಂಚುಗಳಾಗುತ್ತವೆ.

8) **ಯೋನಿಃ -** ಪಶ್ಚಿಮದಿಕ್ಕಿನ ಮೇಖಲೆಗಳ ಮಧ್ಯ ಭಾಗದಲ್ಲಿ ಅಶ್ವತ್ಥ ಪತ್ರದಂತಿರುವ ಅಥವಾ ಆನೆಯ ಅಧರದಂತಿರುವ ಆಕೃತಿಯನ್ನೇ **ಯೋನಿ** ಎನ್ನುವರು. ಇದರ ತುದಿಯು ಕಂಠವನ್ನೂ, ಬುಡದ ಪೃಷ್ಠವು ತೃತೀಯ ಮೇಖಲೆಯನ್ನೂ ಹೊಂದಿಕೊಂಡಿರುತ್ತದೆ. ಅಧ್ವರ್ಯು ಹೋಮಿಸುವ ತುಪ್ಪವು ಅಲ್ಲಿ ಇಲ್ಲಿ ಚೆಲ್ಲದಂತೆ ಅಂತರ್ಬಿಲಾಕೃತಿಯನ್ನೂ, ಮುಂದೆ ತುಪ್ಪ ಹರಿದು ಹೋಗುವಂತೆ ತಗ್ಗಾದ ಆಕಾರವನ್ನೂ, ಹಿಂಭಾಗದಲ್ಲಿ ಎತ್ತರವನ್ನೂ ಮಾಡಿ, ಮಧ್ಯದಲ್ಲಿ ಆಮೆಯ ಬೆನ್ನಿನಾಕಾರದ ಉಬ್ಬನ್ನೂ ಮಾಡಬೇಕೆಂದಿದ್ದಾರೆ. ಇನ್ನು ನಾಲ, ರಂಧ್ರ, ಲಿಂಗಗಳನ್ನೂ ಚಿಹ್ನಿಸುವವರಿದ್ದಾರೆ...

**ಮೇಖಲಾ ಮಧ್ಯತೋ ಯೋನಿಃ ಕುಂಡಾರ್ಧಾತ್ತ್ರ್ಯಂಶ ವಿಸ್ತೃತಾ |**

**ಉನ್ನತಿದ್ವ್ಯಂಗುಲೇನಾಸ್ಯಾಃ ಕುಂಡೋಷ್ಠೀ ಬೋಧಿಪತ್ರವತ್ ||**

ಪ್ರಕೃತ ಹಸ್ತಾರ್ಧ ಕುಂಡದಲ್ಲಿ ಯೋನಿಯ ಅಳತೆಯನ್ನು ನೋಡೋಣ. ಕುಂಡಾರ್ಧದ ೨/೩ ಅಂಶವನ್ನು ಉದ್ದವೆಂದೂ; ೧/೨ ನೇ ಅಂಶವನ್ನು ಅಗಲವೆಂದೂ; ಅದೇ ಕುಂಡದ ೧/೨೪ ನೇ ಭಾಗದಿಂದ ಪೃಷ್ಠೋನ್ನತ್ಯವೆಂದೂ ಹೇಳಿದ್ದಾರೆ. ಆ ಪ್ರಕಾರವಾಗಿ ೦೩.೦೦ ಇಂಚು ಉದ್ದವನ್ನೂ, ೦೨.೨೫ ಇಂಚು ಅಗಲವನ್ನೂ ಮಾಡಿ, ೦೦.೭೫ ಇಂಚಿನಷ್ಟು




ಎತ್ತರಿಸಿ ತುದಿಯವರೆಗೆ ಇಳಿಜಾರಿರಬೇಕು. ಅಲ್ಲದೇ ಪೃಷ್ಠ ಭಾಗದಲ್ಲೂ ೦೦.೭೫ ಇಂಚಿನಷ್ಟು ಉಬ್ಬಿಸಬೇಕು. ಎಂಬುದು ಸ್ಪಷ್ಟವಾಗುತ್ತದೆ.

ಒಟ್ಟಿನಲ್ಲಿ ಪದ ಕುಂಡ ಅಥವಾ ಹಸ್ತಾರ್ಧ ಕುಂಡದ ಅಳತೆಗಳು ಈ ಪ್ರಕಾರ ಇರಬೇಕು.

**I. ಕುಂಡದ ಬಾಹುಗಳು - ೦೯ ಇಂಚುಗಳು.**

**II. ಕುಂಡದ ಆಳ - ೦೯ ಇಂಚುಗಳು.**

**III. ಚತುರಸ್ರನಾಭಿ - ೦೨.೧೨ ಇಂಚು ಉದ್ದ, ೦೨.೧೨ ಇಂಚು ಅಗಲ ಮತ್ತು ೦೧.೦೬ ಇಂಚು ಎತ್ತರ.**

**IV. ಕಂಠ – ಸುತ್ತಲೂ ಮುಕ್ಕಾಲು ಇಂಚು.**

**V. ಮೊದಲ ಮೇಖಲೆ - ಎತ್ತರ ೦೩.೩೭ ಇಂಚು; ಅಗಲ ೦೧.೫೦ ಇಂಚು.**
**ದ್ವಿತೀಯ ಮೇಖಲೆ - ಎತ್ತರ ೦೨.೨೫ ಇಂಚು; ಅಗಲ ೦೧.೧೨ ಇಂಚು.**
**ತೃತೀಯ ಮೇಖಲೆ - ಎತ್ತರ ೦೧.೧೨ ಇಂಚು; ಅಗಲ ೦೦.೭೫ ಇಂಚು.**

**VI. ಯೋನಿ – ಉದ್ದ ೦೩.೦೦ ಇಂಚುಗಳು; ಅಗಲ ೦೨.೨೫ ಇಂಚುಗಳು; ಎತ್ತರ ಮುಕ್ಕಾಲು ಇಂಚು ಮತ್ತು ಹಿಂಭಾಗ ಮುಕ್ಕಾಲು ಇಂಚು ಉಬ್ಬಿರಬೇಕು.**